ಲಿಖಿತ ಮೂಲಕ ಉತ್ತರಿಸುವ

# ಕರ್ನಾಟಕ ವಿಧಾನ ಪರಿಷತ್ತು

## ನೂರ ಮೂವತ್ತೆಂಟನೆಯ ಅಧಿವೇಶನ

## ಮಂಗಳವಾರ, ದಿನಾಂಕ : 23ನೇ ಜುಲೈ, 2019

ಅಧೀಕ್ಷಕರು ಕನ್ನಡ ವಿಶ್ವವಿದ್ಯಾಲಯ ಹಂಪಿ ಇವರ ಬಗ್ಗೆ

ಶ್ರೀ ಬಸವರಾಜ ಶಿವಲಿಂಗಪ್ಪ ಹೊರಟ್ಟಿ (ಶಿಕ್ಷಕರ ಕ್ಷೇತ್ರ):-

497 (482) ಮಾನ್ಯ ಉನ್ನತ ಶಿಕ್ಷಣ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ :-

(ಅ) ಕನ್ನಡ ವಿಶ್ವವಿದ್ಯಾಲಯ ಹಂಪಿಯಲ್ಲಿ ಪ್ರಸ್ತುತ ಅಧೀಕ್ಷಕರಾಗಿ ಕೆಲಸ ನಿರ್ವಹಿಸುತ್ತಿರುವ ನೌಕರರು ಮೂಲವಾಗಿ ಯಾವ ಹುದ್ದೆಗೆ ನೇಮಕವಾಗಿದ್ದರು; (ನೇಮಕಾತಿಯ ಬಗ್ಗೆ ಸಂಪೂರ್ಣ ಮಾಹಿತಿ ಒದಗಿಸುವುದು)

(ಆ) ಇವರು ವ್ಯಾಟ್ಸಪ್ ಹಾಗೂ ಫೇಸ್‌ಬುಕ್‌ನಲ್ಲಿ ಅವಹೇಳನಕಾರಿ ಹೇಳಿಕೆಗಳನ್ನು ಹಾಕಿದ್ದರಿಂದ ಇವರ ವಿರುದ್ಧ ಕಮಲಾಪುರ ಪೊಲೀಸ್ ಠಾಣೆಯಲ್ಲಿ ಯಾವ ದಿನಾಂಕದಂದು ದೂರು ದಾಖಲಾಗಿತ್ತು;

(ಇ) ಈ ದೂರಿನನ್ವಯ ಸದರಿಯವರು ಎಷ್ಟು ಅವಧಿಯವರೆಗೆ ನ್ಯಾಯಾಂಗ ಅಭಿರಕ್ಷೆಯಲ್ಲಿದ್ದರು;

(ಈ) ಇವರ ವಿರುದ್ಧ ನಿವೃತ್ತ ನ್ಯಾಯಾಧೀಶರಿಂದ ವಿಚಾರಣೆ ನಡೆಸಿ ವಿಶ್ವವಿದ್ಯಾಲಯಕ್ಕೆ ವಿಚಾರಣಾ ವರದಿ ಸಲ್ಲಿಸಲಾಗಿದೆಯೇ ;

(ಉ) ಈ ವರದಿಯನ್ವಯ ಯಾವ ಕ್ರಮ ಕೈಗೊಳ್ಳಲಾಗಿದೆ;

(ಊ) ಸದರಿಯವರು ನೇರವಾಗಿ ಮಾಧ್ಯಮಕ್ಕೆ ಹೋಗಲು ಹಾಗೂ ಮಾಹಿತಿ ಹಕ್ಕಿನಡಿ ಮಾಹಿತಿ ಕೇಳಲು ವಿಶ್ವವಿದ್ಯಾಲಯದ ಅನುಮತಿ ಪಡೆದಿದ್ದಾರೆಯೇ;

(ಋ) ಅಮಾನತ್ತಾದ ಸದರಿ ನೌಕರರನ್ನು ಪುನಃ ಯಾವಾಗ ಸೇವೆಗೆ ಸೇರಿಸಿಕೊಂಡು ವೇತನ ನೀಡಲಾಗುತ್ತಿದೆ;

(ಎ) ಅಮಾನತ್ತು ಹಿಂಪಡೆಯಲು ಕಾರಣಗಳೇನು;

(ಏ) ಈ ಪ್ರಕರಣದ ಸಂಪೂರ್ಣ ತನಿಖೆಯನ್ನು ಯಾವುದಾದರೂ ತನಿಖಾ ಏಜೆನ್ಸಿಗೆ ವಹಿಸಲು ಸರ್ಕಾರ ಕ್ರಮ ಕೈಗೊಳ್ಳುವುದೆ?